| Sl. No. | Proposed capacity in MW | Near by villages of the proposed area | Geographical area description of the project |
|---|---|---|---|
| 9 | 40 MW<br><br>(122x330 kW) | Kurtkoti, Horti, Kanavi, Mulgund, **Gadag district.** | Identified potential place is a plain area situated at about 6 Km on the South-West of Gadag Town and it comprises agriculture area. It has gentle elevation of about 650 to 763 mtrs. The entire are is covered in the following Geographical co-ordinates:<br>**Latitude**: 15°15'43"- 15°25'0" N<br>**Longitude**: 75°31'15"- 75°36'57" E<br>**Ridge peaks:** 672, 659, 687, 679, 674, 709, 703, 758, 764, 763, 750m Amsl |
| 10 | 10.40 MW<br><br>(13x800 kW) | Adrahalli, Devihal, Nadigatti, Hosur, Narayanpur, Suganhalli, **Gadag district.** | The potential area of 10.4 MW is comprising of two locations:<br>**(A) 4 MW:** A non-contiguous, NW-SE oriented ridges are located on the East of Adrahalli village. The area is described as open scrub covered with boulders and sheet rocks and located in the Reserved Forest. It has two peaks. The area is covered in the following Geographical co-ordinates:<br>**Latitude**: 15°6'21"- 15°8'30" N<br>**Longitude**: 75°35'0"- 75°37'17" E<br>**Ridge peaks:** 682, 711m Amsl.<br>**(B) 6.40 MW:** This area consists of independent hillocks with no prominent orientations and are situated on the East and West of Tarikoppa & are described as open scrub and are located in Reserved Forest. These ridges have 6 peaks. The area is held in the following Geographical co-ordinates:<br>**Latitude**: 15°2'47"- 15°5'0" N<br>**Longitude**: 75°40'21"- 75°45'0" E<br>**Ridge peaks:** 702, 697, 656, 626, 675, 620m Amsl |
| **Total** | | **236.81 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 689 **ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹಂಚಿಕೆ ಅದೇಶ.

**ಓದಲಾಗಿದೆ:** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಪಿಎಡಬ್ಲ್ಯುಟಿ/2006/684 ದಿನಾಂಕ: 24.3.2006.

2) ದಿನಾಂಕ: 25.3.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: Pioneer Asia Wind Turbines ಕಂಪನಿಗೆ ಕೊಡಗು ಮತ್ತು ಮೈಸೂರು ಜಿಲ್ಲೆಗಳಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಪವನ ವಿದ್ಯುತ್ ಯೋಜನೆ ಹಂಚಿಕೆಯ ಕ್ರಮ ಸಂಖ್ಯೆ: 52 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 147 ಎನ್‌ಸಿಇ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

ಮೆ:: Pioneer Asia Wind Turbines ಕಂಪನಿಗೆ ಕೊಡಗು ಮತ್ತು ಮೈಸೂರು ಜಿಲ್ಲೆಗಳಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗೆ ವಿವರಿಸಿರುವಂತೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :

| Sl. No. | Proposed capacity in MW | Near by villages of the proposed area and district. | Geographical area description of the project |
|---|---|---|---|
| 1 | 10 MW<br><br>(20 X 500 kW) | Guddehosur, Kambibana, Kallur, Motur, Madapatna, Kushalnagar, **Madikeri and Mysore district**. | The identified potential area appears to be complex and consists of several independent, non-contiguous ridges including high plains are situated close by to the villages as mentioned in column (4). The entire area is situated in an open mixed jungle as per SOI map. There are 22 No. of peaks in the potential area. The identified area is held in the following Geographical co-ordinates:<br>**Latitude**: 12°24'13"- 12°30'0" N<br>**Longitude**: 75°50'0"- 75°57'51" E<br>**Ridge peaks:** 922, 958, 1059, 924, 917, 911, 997, 996, 885, 862, 1018, 1184, 912, 923, 912, 914, 884, 940, 836, 903, 884, 987m Amsl |
| **Total** | | **10 MW** | |

1. ಯೋಜನಾಭಿವೃದ್ಧಿದಾರರು ಸರ್ಕಾರದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾ ವ್ಯಾಟ್ ಒಂದಕ್ಕೆ ರೂ 25,000 ದಂತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| > 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ ಕಂದಾಯ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ದಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಪ್ರಸ್ತುತ ಹಂಚಿಕೆ ಸಮಿತಿ ಸಭೆಯಲ್ಲಿ ಶಿಫಾರಸ್ಸು ಮಾಡಿರುವ ಕಂಪನಿಗಳಿಗೆ 2006–07 ನೇ ಸಾಲಿನಲ್ಲಿ 100 ಮೆಗಾ ವ್ಯಾಟ್‌ಗೆ ಮೀರದಂತೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಮೊದಲ ಅರ್ಜಿದಾರರಿಗೆ ಆದ್ಯತೆ ಮೇಲೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು (ಪಿ.ಪಿ.ಎ) ಮಾಡಿಕೊಳ್ಳತಕ್ಕದ್ದು.
12. ಎಲ್ಲಾ ಅಭಿವೃದ್ಧಿದಾರರು ಖುದ್ದಾಗಿ ಯೋಜನೆಗಳನ್ನು ಯಂತ್ರೋಪಕರಣಗಳೊಂದಿಗೆ ಅನುಷ್ಠಾನಗೊಳಿಸಬೇಕು.

ಕರ್ನಾಟಕ ರಾಜ್ಯ ಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 694

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಮರೋಗನ್ ಎಜುಕೇಷನ್ ಫೌಂಡೇಷನ್‌ನ ಟಿ.ಜಾನ್ ಕಾಲೇಜ್ ಆಫ್ ಎಜುಕೇಷನ್, #88/1, ಕಮ್ಮನಹಳ್ಳಿ, ಗೊಟ್ಟಿಗೆರೆ ಅಂಚೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1) ದಿನಾಂಕ:09-01-2004ರ ಸಂ. ಇಡಿ 14 ಯುಆರ್‌ಸಿ 2004ರ ಸರ್ಕಾರಿ ಆದೇಶ.
2) ದಿನಾಂಕ: 03-01-2006, ಸಂಖ್ಯೆ: F.SRO/NCTE/B.Ed/2005-06/5067ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ:09-01-2006ರ ಅಧ್ಯಕ್ಷರು, ಟಿ.ಜಾನ್ ಕಾಲೇಜ್ ಆಫ್ ಎಜುಕೇಷನ್, ಬೆಂಗಳೂರು, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಇಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಬೆಂಗಳೂರಿನ ಮರೋಗನ್ ಎಜುಕೇಷನ್ ಫೌಂಡೇಷನ್‌ನ ಟಿ.ಜಾನ್ ಕಾಲೇಜ್ ಆಫ್ ಎಜುಕೇಷನ್, #88/1, ಕಮ್ಮನಹಳ್ಳಿ, ಗೊಟ್ಟಿಗೆರೆ ಅಂಚೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100** (ಒಂದು ನೂರು ಮಾತ್ರ) **ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ** ದಿನಾಂಕ: 03-01-2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:09-01-2006ರ ಪತ್ರದಲ್ಲಿ ಸದರಿ ಕಾಲೇಜಿನ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 18 ಯುಬಿವಿ 2006, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಬೆಂಗಳೂರಿನ ಮರೋಗನ್ ಎಜುಕೇಷನ್ ಫೌಂಡೇಷನ್‌ನ ಟಿ.ಜಾನ್ ಕಾಲೇಜ್ ಆಫ್ ಎಜುಕೇಷನ್, #88/1, ಕಮ್ಮನಹಳ್ಳಿ, ಗೊಟ್ಟಿಗೆರೆ ಅಂಚೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 603 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ದಾವಣಗೆರೆಯ ಡಿ.ಎಂ.ಎಸ್. ಕರ್ನಾಟಕ ಸೋಷಿಯಲ್, ಎಜುಕೇಷನಲ್ ಅಂಡ್ ಕಲ್ಚುರಲ್ ಸೆಂಟರ್‌ನ ದಾವಣಗೆರೆಯಲ್ಲಿನ ಕೆ.ಎಸ್.ಎಸ್. ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1) ದಿನಾಂಕ:20-02-2004ರ ಸಂ. ಇಡಿ 171 ಯುಆರ್‌ಸಿ 2003ರ ಸರ್ಕಾರಿ ಆದೇಶ.
2) ದಿನಾಂಕ:04-01-2006, ಸಂಖ್ಯೆ: F.SRO/NCTE/B.Ed/ 2005-06/5084ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ:22-02-2006ರ ಪ್ರಾಂಶುಪಾಲರು, ಕೆ.ಎಸ್.ಎಸ್. ಕಾಲೇಜ್ ಆಫ್ ಎಜುಕೇಷನ್, ದಾವಣಗೆರೆ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸ ಲಾಗುತ್ತಿರುವ ಬಿ.ಇಡಿ/ಬಿ.ಪಿ.ಇಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ದಾವಣಗೆರೆಯ ಡಿ.ಎಂ.ಎಸ್. ಕರ್ನಾಟಕ ಸೋಷಿಯಲ್, ಎಜುಕೇಷನಲ್ ಅಂಡ್ ಕಲ್ಚುರಲ್ ಸೆಂಟರ್‌ನ ಕೆ.ಎಸ್.ಎಸ್. ಕಾಲೇಜ್ ಆಫ್ ಎಜುಕೇಷನ್, #1949/3, ಡಿ.ಎಂ.ಎಸ್. "ಸಾಧನ", ವಿದ್ಯಾನಗರ, ದಾವಣಗೆರೆ, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ** ದಿನಾಂಕ: 04-01-2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:22-02-2006ರ ಪತ್ರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 19 ಯುಎಸ್‌ವಿ 2006, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ದಾವಣಗೆರೆಯ ಡಿ.ಎಂ.ಎಸ್. ಕರ್ನಾಟಕ ಸೋಷಿಯಲ್, ಎಜುಕೇಷನಲ್ ಅಂಡ್ ಕಲ್ಚುರಲ್ ಸೆಂಟರ್‌ನ ಕೆ.ಎಸ್.ಎಸ್. ಕಾಲೇಜ್ ಆಫ್ ಎಜುಕೇಷನ್, #1949/3, ಡಿ.ಎಂ.ಎಸ್. "ಸಾಧನ",** ವಿದ್ಯಾನಗರ, **ದಾವಣಗೆರೆ, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 604 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ಆರ್ಥಿಕ ಸಚಿವಾಲಯ**

**ವಿಷಯ:** ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಇ (ವಿಶೇಷ) 14 ಪಿಇಟಿ 2005, ದಿನಾಂಕ: 15.11.2005.

**ಆದೇಶ ಸಂಖ್ಯೆ: ಆಇ (ವಿಶೇಷ) 13 ಸಿಪಿಪಿ 2006, ಬೆಂಗಳೂರು, ದಿನಾಂಕ: 3ನೇ ಮೇ 2006**

ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 71 ರಿಂದ ಶೇಕಡ 74ಕ್ಕೆ ಹೆಚ್ಚಿಸಿ ದಿನಾಂಕ: 1.1.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ಮುರಳಿ ಕೃಷ್ಣ**

ಪಿ.ಆರ್. 741 ವಿಶೇಷಾಧಿಕಾರಿ (ವಿಶ್ರಾಂತಿ ವೇತನ), ಆರ್ಥಿಕ ಇಲಾಖೆ.

**ವಿಷಯ:** ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ವಿಶೇಷ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆಇ 8 ಎಸ್‌ಆರ್‌ಪಿ 2006, ದಿನಾಂಕ: 29.3.2006.

ಮೇಲೆ ಓದಲಾದ ದಿನಾಂಕ: 29.3.2006ರ ಆದೇಶದಲ್ಲಿ, 5ನೇ ರಾಜ್ಯ ವೇತನ ಆಯೋಗದ ಮಧ್ಯಂತರ ವರದಿಯಲ್ಲಿ ಮಾಡಿರುವ ಶಿಫಾರಸ್ಸಿನನ್ವಯ, ಸರ್ಕಾರವು ಪೂರ್ಣ ಕಾಲಾವಧಿಯ ನಿಯತಕಾಲಿಕ ವೇತನ ಶ್ರೇಣಿಯಲ್ಲಿರುವ ರಾಜ್ಯ ಸರ್ಕಾರಿ ನೌಕರರಿಗೆ / ನಿಯತಕಾಲಿಕ ವೇತನ ಶ್ರೇಣಿಯಲ್ಲಿರುವ ಇತರ ನೌಕರರಿಗೆ ಮಾಸಿಕ ಕನಿಷ್ಠ ರೂ.300 ಮತ್ತು ಗರಿಷ್ಠ ರೂ.1500/- ಗಳ ಮಿತಿಗೊಳಪಟ್ಟು ಅವರ ಮೂಲ ವೇತನದ ಶೇಕಡ 10 ರಷ್ಟು ತಾತ್ಕಾಲಿಕ ಪರಿಹಾರವನ್ನು ಮತ್ತು ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಪ್ರಾಥಮಿಕ ಶಾಲಾ ಶಿಕ್ಷಕರೂ ಸೇರಿದಂತೆ ರಾಜ್ಯದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ: 1.4.2006 ರಿಂದ ಜಾರಿಗೆ ಬರುವಂತೆ ಮಾಸಿಕ ರೂ.200/- ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಿರುತ್ತದೆ.

ಕರ್ನಾಟಕ ಪ್ರೌಢಶಿಕ್ಷಣ ಶಿಕ್ಷಕರ ಸಂಘ ಮತ್ತು ಕರ್ನಾಟಕ ಪದವಿಪೂರ್ವ ಕಾಲೇಜು ಉಪನ್ಯಾಸಕರ ಸಂಘದವರು ಸರ್ಕಾರಕ್ಕೆ ಬೇಡಿಕೆ ಸಲ್ಲಿಸಿ, ಪ್ರೌಢಶಿಕ್ಷಣ ಶಾಲಾ ಶಿಕ್ಷಕರಿಗೆ ಮತ್ತು ಪದವಿಪೂರ್ವ ಕಾಲೇಜು ಉಪನ್ಯಾಸಕರಿಗೂ ಸಹ ಮಾಸಿಕ ರೂ.200/- ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 14 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ: 12ನೇ ಮೇ 2006**

ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಪ್ರೌಢಶಾಲಾ ಶಿಕ್ಷಕರೂ ಸೇರಿದಂತೆ ರಾಜ್ಯ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ಅನುದಾನಿತ ಪದವಿಪೂರ್ವ ಕಾಲೇಜಿನ ಉಪನ್ಯಾಸಕರು ಮತ್ತು ಸ್ಥಳೀಯ ಸಂಸ್ಥೆಗಳ ಪದವಿಪೂರ್ವ ಕಾಲೇಜಿನ ಉಪನ್ಯಾಸಕರು ಸೇರಿದಂತೆ ಪದವಿಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಮಾಸಿಕ ರೂ.200/- ಗಳ ವಿಶೇಷ ಭತ್ಯೆಯನ್ನು ಮಧ್ಯಂತರ ಪರಿಹಾರವಾಗಿ ದಿನಾಂಕ: 1.4.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

ಆದರೆ, ಈ ಆದೇಶವು ನಿವೃತ್ತಿಯ ತರುವಾಯ ಪುನರ್ ನೇಮಕಾತಿ ಹೊಂದಿರುವ ಅಥವಾ ಒಪ್ಪಂದದ ಆಧಾರದ ಮೇಲೆ ನೇಮಕಾತಿ ಹೊಂದಿರುವ ವ್ಯಕ್ತಿಗಳಿಗೆ ಅನ್ವಯಿಸುವುದಿಲ್ಲ.

ಈ ಆದೇಶದ ಮೂಲಕ ಮಂಜೂರು ಮಾಡಿದ ವಿಶೇಷ ಭತ್ಯೆಯ ಮೊತ್ತವನ್ನು ವಿಶಿಷ್ಟ ಸಂಭಾವನೆಯಾಗಿ ತೋರಿಸತಕ್ಕದ್ದು ಮತ್ತು 5ನೇ ವೇತನ ಆಯೋಗದ ಅಂತಿಮ ಶಿಫಾರಸ್ಸುಗಳ ಮೇಲೆ ಮಾಡಲಾಗುವ ವೇತನದಲ್ಲಿನ ಹೆಚ್ಚಳದಲ್ಲಿ ಹೊಂದಾಣಿಕೆ ಮಾಡಲಾಗುವುದು.

ಸ್ಥಳೀಯ ಸಂಸ್ಥೆಗಳ ನೌಕರರಿಗೆ ಈ ಸೌಲಭ್ಯವನ್ನು ಮಂಜೂರು ಮಾಡುವುದರಿಂದಾಗಿ ಉಂಟಾಗುವ ವೆಚ್ಚವನ್ನು ಆಯಾ ಸ್ಥಳೀಯ ಸಂಸ್ಥೆಗಳೇ ಭರಿಸತಕ್ಕದ್ದು.

ಈ ಆದೇಶದ ಮೂಲಕ ಮಂಜೂರಾದ ವಿಶೇಷ ಭತ್ಯೆಯ ಮೊತ್ತವು ವಿಶಿಷ್ಟ ಸಂಭಾವನೆಯಾಗಿದ್ದು, ಇದನ್ನು ನಿವೃತ್ತಿ ಸೌಲಭ್ಯವನ್ನು ನಿರ್ಧರಿಸುವಾಗ ಅಥವಾ ಬೇರೆ ಯಾವುದೇ ಉದ್ದೇಶಗಳಿಗೆ ಪರಿಗಣಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಪಿ.ಆರ್. 742 ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-2).

**ಶಿಕ್ಷಣ ಸಚಿವಾಲಯ**

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಗುಲ್ಬರ್ಗಾ ಜಿಲ್ಲೆಯ ಮಾಲ್ಖೇಡ್ ರೋಡ್ ಸ್ಟೇಷನ್ ತಾಂಡಾದ ಬಂಜಾರ ಎಜುಕೇಷನ್ ಸೊಸೈಟಿಯ ಅರ್ಚನ ಬಿ.ಎಡ್. ಕಾಲೇಜ್, ಉಲ್ಲಾಳ ಕ್ರಾಸ್, ನಾಗದೇವನಹಳ್ಳಿ, 2ನೇ ಬ್ಲಾಕ್, ಜ್ಞಾನಭಾರತಿ, ಬೆಂಗಳೂರು-560056, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1) ದಿನಾಂಕ:08-03-2004, ಸಂಖ್ಯೆ: ಇಡಿ 263 ಯುಆರ್‌ಸಿ 2004ರ ಸರ್ಕಾರಿ ಆದೇಶ.
2) ದಿನಾಂಕ:24-12-2005, ಸಂಖ್ಯೆ: F.SRO/NCTE/B.Ed/ 2005-06/4919ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ:02-02-2006ರ ಪ್ರಾಂಶುಪಾಲರು, ಅರ್ಚನ ಬಿ.ಎಡ್. ಕಾಲೇಜು, ಬೆಂಗಳೂರು-560056, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸ ಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಗುಲ್ಬರ್ಗಾ ಜಿಲ್ಲೆಯ ಮಾಲ್ಖೇಡ್ ರೋಡ್ ಸ್ಟೇಷನ್ ತಾಂಡಾದ ಬಂಜಾರ ಎಜುಕೇಷನ್ ಸೊಸೈಟಿಯ ಅರ್ಚನ ಬಿ.ಎಡ್. ಕಾಲೇಜ್, ಎನ್.ಜಿ.ಓ. ಕಾಲೋನಿ, ಕಮಲಾನಗರ, ಬೆಂಗಳೂರು-560079, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ** ದಿನಾಂಕ: 24-12-2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:02-02-2006ರ ಪತ್ರದಲ್ಲಿ ಸದರಿ ಸಂಸ್ಥೆಯ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 33 ಯುಬಿವಿ 2006, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಗುಲ್ಬರ್ಗಾ ಜಿಲ್ಲೆಯ ಮಾಲ್ಖೇಡ್ ರೋಡ್ ಸ್ಟೇಷನ್ ತಾಂಡಾದ ಬಂಜಾರ ಎಜುಕೇಷನ್ ಸೊಸೈಟಿಯ ಅರ್ಚನ ಬಿ.ಎಡ್. ಕಾಲೇಜ್, ಉಲ್ಲಾಳ ಕ್ರಾಸ್, ನಾಗದೇವನಹಳ್ಳಿ, 2ನೇ ಬ್ಲಾಕ್, ಜ್ಞಾನಭಾರತಿ, ಬೆಂಗಳೂರು-560056, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 616 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005–06ನೇ ಶೈಕ್ಷಣಿಕ ಸಾಲಿಗೆ ಗುಲ್ಬರ್ಗಾ ವಿಶ್ವವಿದ್ಯಾಲಯದ ವ್ಯಾಪ್ತಿಗೊಳಪಡುವ ವಿವಿಧ ಶಿಕ್ಷಣ ಸಂಸ್ಥೆಗಳ ಶಿಕ್ಷಣ ಮಹಾವಿದ್ಯಾಲಯಗಳಲ್ಲಿನ ಬಿ.ಎಡ್. ಕೋರ್ಸಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗಧಿಪಡಿಸುತ್ತಿದೆ.

2) ಎನ್.ಸಿ.ಟಿ.ಇ.ಯು ಗುಲ್ಬರ್ಗಾ ವಿಶ್ವವಿದ್ಯಾಲಯದ ವ್ಯಾಪ್ತಿಗೊಳಪಡುವ ಈ ಕೆಳಕಂಡ ಶಿಕ್ಷಣ ಸಂಸ್ಥೆಗಳ ಬಿ.ಎಡ್. ಕೋರ್ಸಿಗೆ 2005–6ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುತ್ತದೆ.

| ಕ್ರ. ಸಂ. | ವಿದ್ಯಾಸಂಸ್ಥೆಯ ಹೆಸರು | ಶಿಕ್ಷಣ ಸಂಸ್ಥೆಯ ಹೆಸರು / ವಿಳಾಸ | ಎನ್.ಸಿ.ಟಿ.ಇ. ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| (1) | (2) | (3) | (4) |
| 1 | ನೂರ್ ಎಜುಕೇಷನ್ ಟ್ರಸ್ಟ್, ಬೀದರ್ | ನೂರ್ ಕಾಲೇಜ್ ಆಫ್ ಎಜುಕೇಷನ್, ಬೀದರ್ | F.SRO/NCTE/ B.Ed./2005-06/5075, dated: 03-01-2006 |
| 2 | ಕರ್ನಾಟಕ ಪೀಪಲ್ಸ್ ಎಜುಕೇಷನ್ ಸೊಸೈಟಿ, ಗುಲ್ಬರ್ಗಾ | ನಳಂದ ಬಿ.ಎಡ್. ಕಾಲೇಜ್, ರಾಯಚೂರು | F.SRO/NCTE/ B.Ed./2005-06/4955, dated: 24-12-2005 |
| 3 | ಸೈಯದ್ ಬಾರಿ ಎಜುಕೇಷನಲ್ ಅಂಡ್ ಚಾರಿಟಬಲ್ ಟ್ರಸ್ಟ್, ಗುಲ್ಬರ್ಗಾ | ಹಮೀದ್ ಪಿಯಾರೆ ಕಾಲೇಜ್ ಆಫ್ ಎಜುಕೇಷನ್, ಮಾಮಿನ್‌ಪುರ, ಗುಲ್ಬರ್ಗಾ ಜಿಲ್ಲೆ. | F.SRO/NCTE/ B.Ed./2005-06/5138, dated: 06-01-2006 |
| 4 | ಗೌಸಿಯಾ ಎಜುಕೇಷನ್ ಮೈನಾರಿಟೀಸ್ ಸೊಸೈಟಿ, ಬಳ್ಳಾರಿ. | ಸೋನಿಯಾ ಗಾಂಧಿ ಬಿ.ಎಡ್. ಕಾಲೇಜ್, ಬಳ್ಳಾರಿ. | F.SRO/NCTE/ B.Ed./2005-06/4982, dated: 26-12-2005 |
| 5 | ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘ, ಗುಲ್ಬರ್ಗಾ | ಶರಣ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, ಬ್ರಹ್ಮಪುರ, ಗುಲ್ಬರ್ಗಾ. | F.SRO/NCTE/ B.Ed./2005-06/4814, dated: 21-12-2005 |

| ಕ್ರ. ಸಂ. | ವಿದ್ಯಾಸಂಸ್ಥೆಯ ಹೆಸರು | ಶಿಕ್ಷಣ ಸಂಸ್ಥೆಯ ಹೆಸರು / ವಿಳಾಸ | ಎನ್.ಸಿ.ಟಿ.ಇ. ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|
| 6 | ಶ್ರೀ ಗಂಗಾಪರಮೇಶ್ವರಿ ಎಜುಕೇಷನಲ್ ಟ್ರಸ್ಟ್, ಗುಲ್ಬರ್ಗಾ. | ಶ್ರೀ ಗಂಗಾಪರಮೇಶ್ವರಿ ಬಿ.ಎಡ್. ಕಾಲೇಜ್, ಚಿತ್ತಾಪುರ್, ಗುಲ್ಬರ್ಗಾ ಜಿಲ್ಲೆ. | F.SRO/NCTE/ B.Ed./2005-06/5042, dated: 30-12-2005 |
| 7 | ಶ್ರೀ ಶಿವಲಿಂಗ ವಿದ್ಯಾ ವರ್ಧಕ ಎಜುಕೇಷನ್ ಸೊಸೈಟಿ, ಗುಲ್ಬರ್ಗಾ. | ಶ್ರೀಮತಿ ಎಂ.ಸಿ. ವಸಂತ ಬಿ.ಎಡ್. ಕಾಲೇಜ್, ರಾಜಾಪುರ್ ರಸ್ತೆ, ಅಂಬೇಡ್ಕರ್ ಹಾಸ್ಟೆಲ್ ಹತ್ತಿರ, ಗುಲ್ಬರ್ಗಾ ಜಿಲ್ಲೆ. | F.SRO/NCTE/ B.Ed./2005-06/4917, dated: 24-12-2005 |
| 8 | ಶ್ರೀ ಸತ್ಯಂ ಎಜುಕೇಷನ್ ಸೊಸೈಟಿ, ಬಳ್ಳಾರಿ. | ಶ್ರೀ ಸತ್ಯಂ ಕಾಲೇಜ್ ಆಫ್ ಎಜುಕೇಷನ್, ಬಳ್ಳಾರಿ. | F.SRO/NCTE/ B.Ed./2005-06/4928, dated: 24-12-2005 |

3) ಮೇಲ್ಕಂಡ ಶಿಕ್ಷಣ ಸಂಸ್ಥೆಗಳಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಎನ್.ಸಿ.ಟಿ.ಇ. 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದಿಸಿರುವ ಹಿನ್ನೆಲೆಯಲ್ಲಿ ಸದರಿ ಕಾಲೇಜುಗಳಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವ ವಿಚಾರವನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 20 ಯುಜಿವಿ 2006, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2006**

4) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಗುಲ್ಬರ್ಗಾ ವಿಶ್ವವಿದ್ಯಾಲಯದ ವ್ಯಾಪ್ತಿಗೊಳಪಡುವ ಈ **ಕೆಳಕಂಡ ವಿದ್ಯಾ ಸಂಸ್ಥೆಗಳ ಶಿಕ್ಷಣ ಸಂಸ್ಥೆಗಳಲ್ಲಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು** ನಿಗದಿಪಡಿಸಲಾಗಿದೆ.

| ಕ್ರ. ಸಂ. | ವಿದ್ಯಾಸಂಸ್ಥೆಯ ಹೆಸರು | ಶಿಕ್ಷಣ ಸಂಸ್ಥೆಯ ಹೆಸರು / ವಿಳಾಸ |
|---|---|---|
| (1) | (2) | (3) |
| 1 | ನೂರ್ ಎಜುಕೇಷನ್ ಟ್ರಸ್ಟ್, ಬೀದರ್ | ನೂರ್ ಕಾಲೇಜ್ ಆಫ್ ಎಜುಕೇಷನ್, ಬೀದರ್ |
| 2 | ಕರ್ನಾಟಕ ಪೀಪಲ್ಸ್ ಎಜುಕೇಷನ್ ಸೊಸೈಟಿ, ಗುಲ್ಬರ್ಗಾ | ನಳಂದ ಬಿ.ಎಡ್. ಕಾಲೇಜ್, ರಾಯಚೂರು |
| 3 | ಸೈಯದ್ ಬಾರಿ ಎಜುಕೇಷನಲ್ ಅಂಡ್ ಚಾರಿಟಬಲ್ ಟ್ರಸ್ಟ್, ಗುಲ್ಬರ್ಗಾ | ಹಮೀದ್ ಪಿಯಾರೆ ಕಾಲೇಜ್ ಆಫ್ ಎಜುಕೇಷನ್, ಮಾಮಿನ್‌ಪುರ, ಗುಲ್ಬರ್ಗಾ ಜಿಲ್ಲೆ. |
| 4 | ಗೌಸಿಯಾ ಎಜುಕೇಷನ್ ಮೈನಾರಿಟೀಸ್ ಸೊಸೈಟಿ, ಬಳ್ಳಾರಿ. | ಸೋನಿಯಾ ಗಾಂಧಿ ಬಿ.ಎಡ್. ಕಾಲೇಜ್, ಬಳ್ಳಾರಿ. |
| 5 | ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘ, ಗುಲ್ಬರ್ಗಾ | ಶರಣ ಬಸವೇಶ್ವರ ಕಾಲೇಜ್ ಆಫ್ ಎಜುಕೇಷನ್, ಬ್ರಹ್ಮಪುರ, ಗುಲ್ಬರ್ಗಾ. |
| 6 | ಶ್ರೀ ಗಂಗಾಪರಮೇಶ್ವರಿ ಎಜುಕೇಷನಲ್ ಟ್ರಸ್ಟ್, ಗುಲ್ಬರ್ಗಾ. | ಶ್ರೀ ಗಂಗಾಪರಮೇಶ್ವರಿ ಬಿ.ಎಡ್. ಕಾಲೇಜ್, ಚಿತ್ತಾಪುರ್, ಗುಲ್ಬರ್ಗಾ ಜಿಲ್ಲೆ. |
| 7 | ಶ್ರೀ ಶಿವಲಿಂಗ ವಿದ್ಯಾ ವರ್ಧಕ ಎಜುಕೇಷನ್ ಸೊಸೈಟಿ, ಗುಲ್ಬರ್ಗಾ. | ಶ್ರೀಮತಿ ಎಂ.ಸಿ. ವಸಂತ ಬಿ.ಎಡ್. ಕಾಲೇಜ್, ರಾಜಾಪುರ್ ರಸ್ತೆ, ಅಂಬೇಡ್ಕರ್ ಹಾಸ್ಟೆಲ್ ಹತ್ತಿರ, ಗುಲ್ಬರ್ಗಾ ಜಿಲ್ಲೆ. |
| 8 | ಶ್ರೀ ಸತ್ಯಂ ಎಜುಕೇಷನ್ ಸೊಸೈಟಿ, ಬಳ್ಳಾರಿ. | ಶ್ರೀ ಸತ್ಯಂ ಕಾಲೇಜ್ ಆಫ್ ಎಜುಕೇಷನ್, ಬಳ್ಳಾರಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 661

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಗುಲ್ಬರ್ಗಾದ ಮದರ್ ತೆರೇಸಾ ಚಾರಿಟಬಲ್ ಟ್ರಸ್ಟ್(ರಿ)ನ ಗುಲ್ಬರ್ಗಾದಲ್ಲಿನ ಮದರ್ ತೆರೇಸಾ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1) ದಿನಾಂಕ: 23-10-2003, ಸಂಖ್ಯೆ: ಗುವಿಗು/ಷಿವಿ/ಸಂಯೋಜನೆ-3/2003-04/1315ರ ಗುಲ್ಬರ್ಗಾ ವಿಶ್ವವಿದ್ಯಾಲಯದ ಕುಲಸಚಿವರ ಪತ್ರ.
2) ದಿನಾಂಕ:09-01-2004ರ ಸಂಖ್ಯೆ: ಇಡಿ 258 ಯುಜಿವಿ 2003ರ ಸರ್ಕಾರಿ ಆದೇಶ.
3) ದಿನಾಂಕ:21-12-2005, ಸಂಖ್ಯೆ: F.SRO/NCTE/B.Ed/2005-06/4807ರ NCTEಯ ದಕ್ಷಿಣ ಪ್ರಾದೇಶಿಕ ಸಮಿತಿಯ ಅಧೀನ ಕಾರ್ಯದರ್ಶಿಯವರ ಪತ್ರ.
4) ದಿ:18-03-2006ರ ಅಧ್ಯಕ್ಷರು, ಮದರ್ ತೆರೇಸಾ ಚಾರಿಟಬಲ್ ಟ್ರಸ್ಟ್(ರಿ), ಗುಲ್ಬರ್ಗಾ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸ ಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(2)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಗುಲ್ಬರ್ಗಾದ ಮದರ್ ತೆರೇಸಾ ಚಾರಿಟಬಲ್ ಟ್ರಸ್ಟ್(ರಿ)ನ ಗುಲ್ಬರ್ಗಾದಲ್ಲಿನ ಮದರ್ ತೆರೇಸಾ ಕಾಲೇಜ್ ಆಫ್ ಎಜುಕೇಷನ್, ಈ ಕಾಲೇಜಿನ ಬಿ.ಎಡ್ ಕೋರ್ಸನ್ನು 100** (ಒಂದು ನೂರು ಮಾತ್ರ) **ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (3)ರಲ್ಲಿರುವ** ದಿನಾಂಕ: 21-12-2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(4)ರಲ್ಲಿರುವ ದಿನಾಂಕ: 18-03-2006ರ ಪತ್ರದಲ್ಲಿ ಸದರಿ ಟ್ರಸ್ಟ್‌ನ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 28 ಯುಜಿವಿ 2006, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಗುಲ್ಬರ್ಗಾದ ಮದರ್ ತೆರೇಸಾ ಚಾರಿಟಬಲ್ ಟ್ರಸ್ಟ್(ರಿ)ನ ಗುಲ್ಬರ್ಗಾದಲ್ಲಿನ ಮದರ್ ತೆರೇಸಾ ಕಾಲೇಜ್ ಆಫ್ ಎಜುಕೇಷನ್, ಈ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

ಪಿ.ಆರ್. 663

**ವಿಷಯ:** 2005–06ನೇ ಶೈಕ್ಷಣಿಕ ಸಾಲಿನಿಂದ ಬೀದರ್‌ನ ಅರುಣೋದಯ ವಿದ್ಯಾ ವಿಕಾಸ ಟ್ರಸ್ಟ್(ರಿ)ನ ಗ್ರಾಮೀಣ ಶಿಕ್ಷಣ ಕಾಲೇಜಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:** (1) ದಿನಾಂಕ:26–12–2003, ಸಂಖ್ಯೆ: ಇಡಿ 225 ಯುಜಿವಿ 2003ರ ಸರ್ಕಾರಿ ಆದೇಶ.

(2) ದಿನಾಂಕ: 31–01–2006, ಸಂಖ್ಯೆ: F.SRO/NCTE/B.Ed/2005–06/5289 ರ ಎನ್.ಸಿ.ಟಿ.ಇ ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.

(3) ದಿನಾಂಕ: 22–03–2006ರ ಬೀದರ್‌ನ ಅರುಣೋದಯ ವಿದ್ಯಾ ವಿಕಾಸ ಟ್ರಸ್ಟ್ (ರಿ)ನ ಅಧ್ಯಕ್ಷರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್./ ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ, ಯ ಅಧಿನಿಯಮದ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 26–12–2003, ಸಂಖ್ಯೆ: ಇಡಿ 225 ಯುಜಿವಿ 2003ರ ಸರ್ಕಾರಿ ಆದೇಶದಲ್ಲಿ ಬೀದರ್‌ನ ಅರುಣೋದಯ ವಿದ್ಯಾ ವಿಕಾಸ ಟ್ರಸ್ಟ್(ರಿ) ಬೀದರ್ ಜಿಲ್ಲೆ ಔರಾದ್(ಬಿ)ನಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ಗ್ರಾಮೀಣ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸನ್ನು 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ:31–01–2006, ಸಂಖ್ಯೆ: F.SRO/NCTE/B.P.Ed/2005–06/5289ರ ಎನ್.ಸಿ.ಟಿ.ಇಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್.ಸಿ.ಟಿ.ಇ.ಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ದಿನಾಂಕ: 22–03–2006 ಪತ್ರದಲ್ಲಿ ಬೀದರ್‌ನ ಅರುಣೋದಯ ವಿದ್ಯಾ ವಿಕಾಸ ಟ್ರಸ್ಟ್(ರಿ)ನ ಅಧ್ಯಕ್ಷರು ಸದರಿ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 31 ಯುಜಿವಿ 2006, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1) (ಎ) ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ್‌ನ ಅರುಣೋದಯ ವಿದ್ಯಾ ವಿಕಾಸ ಟ್ರಸ್ಟ್(ರಿ)ನ ಗ್ರಾಮೀಣ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005–06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 664

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಎಸ್.ವಿ. ಎಜುಕೇಷನಲ್ ಟ್ರಸ್ಟ್(ರಿ)ನ ದಿ ರೆಜೆನ್ಸಿ ಕಾಲೇಜ್ ಆಫ್ ಎಜುಕೇಷನ್, #51/1, ಎ.ಎಂ.ಎಸ್. ಬಡಾವಣೆ, ವಿದ್ಯಾರಣ್ಯಪುರ, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:**
1) ದಿನಾಂಕ:26-02-2004ರ ಸಂಖ್ಯೆ: ಇಡಿ 219 ಯುಆರ್‌ಸಿ 2004ರ ಸರ್ಕಾರಿ ಆದೇಶ.
2) ದಿನಾಂಕ:15-03-2006, ಸಂಖ್ಯೆ: F.SRO/NCTE/B.Ed/2005-06/5630ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.
3) ದಿ:16-03-2006ರ ಪ್ರಾಂಶುಪಾಲರು, ದಿ ರೆಜೆನ್ಸಿ ಕಾಲೇಜ್ ಆಫ್ ಎಜುಕೇಷನ್, ವಿದ್ಯಾರಣ್ಯಪುರ, ಬೆಂಗಳೂರು, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ(1)ರಲ್ಲಿರುವ ಸರ್ಕಾರಿ ಆದೇಶದಲ್ಲಿ **ಬೆಂಗಳೂರಿನ ಎಸ್.ವಿ. ಎಜುಕೇಷನಲ್ ಟ್ರಸ್ಟ್(ರಿ)ನ ದಿ ರೆಜೆನ್ಸಿ ಕಾಲೇಜ್ ಆಫ್ ಎಜುಕೇಷನ್, #51/1, ಎ.ಎಂ.ಎಸ್. ಬಡಾವಣೆ, ವಿದ್ಯಾರಣ್ಯಪುರ, ಬೆಂಗಳೂರು, ಈ ಕಾಲೇಜಿಗೆ ಬಿ.ಎಡ್ ಕೋರ್ಸನ್ನು 100** (ಒಂದು ನೂರು ಮಾತ್ರ) **ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ** ದಿನಾಂಕ: 15-03-2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100(ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ(3)ರಲ್ಲಿರುವ ದಿನಾಂಕ:16-03-2006ರ ಪತ್ರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ತಮ್ಮ ಕಾಲೇಜಿನಲ್ಲಿ **ಬಿ.ಎಡ್ ಕೋರ್ಸನ್ನು** ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 38 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, **ಬೆಂಗಳೂರಿನ ಎಸ್.ವಿ. ಎಜುಕೇಷನಲ್ ಟ್ರಸ್ಟ್(ರಿ)ನ ದಿ ರೆಜೆನ್ಸಿ ಕಾಲೇಜ್ ಆಫ್ ಎಜುಕೇಷನ್, #51/1, ಎ.ಎಂ.ಎಸ್. ಬಡಾವಣೆ, ವಿದ್ಯಾರಣ್ಯಪುರ, ಬೆಂಗಳೂರು, ಈ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ)** ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 692

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಶ್ರೀ.ಶಿವಮಲ್ಲು ನಿವೃತ್ತ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಇವರ ವಿರುದ್ಧ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:**
1) ಪೋಲೀಸ ಮಹಾ ನಿರೀಕ್ಷಕರು, ಬೆಂಗಳೂರು. ಮೆಟ್ರೋ ಪಾಲಿಟನ್ ಕಾರ್ಯಾಚರಣೆ ಪಡೆರವರ ದಿನಾಂಕ:9-12-99ರ ಪತ್ರದ ಸಂ:ಉಅ(ಕಾಪ)ಇಪಸ್:9:99-00.
2) ಕಾರಣ ಕೇಳಿದ ಪತ್ರದ ದಿ:4-2-2000.
3) ನೌಕರರ ಸಮಜಾಯಿಷಿ ದಿ:21-2-2000,ದಿ:22-2-2000 ಮತ್ತು 7-3-2000.
4) ಬೆಂಗಳೂರು ಮಹಾನಗರ ಪಾಲಿಕೆಯ ಆರೋಪಣಾ ಪಟ್ಟಿ ದಿನಾಂಕ:10-4-2000.
5) ಸರ್ಕಾರದ ಕಾರ್ಯದರ್ಶಿಗಳು ಸಮಾಜ ಕಲ್ಯಾಣ ಇಲಾಖೆ ಕರ್ನಾಟಕ ಸರ್ಕಾರ ಇವರಿಗೆ ಬರೆದಿರುವ ದಿ:12-5-2000. ಈ ಕಚೇರಿಯ ಸಮಸಂಖ್ಯೆಯ ಪತ್ರ.
6) ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ಇವರಿಗೆ ದಿ:10-8-2000ರಂದು ಬರೆದಿರುವ ಸಮಸಂಖ್ಯೆಯ ಪತ್ರ.
7) ವಿಚಾರಣಾಧಿಕಾರಿಗಳನ್ನು ನೇಮಿಸುವ ಕುರಿತು ಈ ಕಚೇರಿಯ ದಿ:5-8-2000 ಕಚೇರಿ ಆದೇಶದ ಸಮಸಂಖ್ಯೆ.
8) ವಿಚಾರಣಾಧಿಕಾರಿಗಳ ವರದಿಯ ದಿ:4-8-2001.
9) ದಿ:28-9-2001ರ ಕಾರಣ ಕೇಳಿ ಪತ್ರ.
10) ಶ್ರೀ ಶಿವಮಲ್ಲುರವರ ಸಮಜಾಯಿಷಿ ದಿ:26-12-2001.
11) ಆಯುಕ್ತರು ಸಮಾಜ ಕಲ್ಯಾಣ ಇಲಾಖೆರವರಿಗೆ ದಿ:3-5-2002ರಂದು ಬೆಂಗಳೂರು ಮಹಾನಗರ ಪಾಲಿಕೆಗೆ ಬರೆದಿರುವ ಪತ್ರ.

12) ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರು ಪ್ರಧಾನ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ ಇವರಿಗೆ ಬರೆದಿರುವ ದಿ:11-12-2002ರ ಪತ್ರದ ಸಂ:ಸಕನಿ:ಸಿಬ್ಬಂದಿ-1:ಸಿಆರ್:ವೈಕ: 2000-01.
13) ಆಯುಕ್ತರು ಮಹಾನಗರಪಾಲಿಕೆ ಉಪಾಯುಕ್ತರು(ಆಡಳಿತ ಮತ್ತು ಮಾನವ ಸಂಪನ್ಮೂಲ)ಬೆಂಗಳೂರು ಮಹಾನಗರಪಾಲಿಕೆರವರ ಪತ್ರ.
14) ಸರ್ಕಾರದ ಪತ್ರ ಸಂ:443 ಪಕಸೇ 2000,ದಿ:14-2-2005.
15) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ:ಪಿಎಸ್‌ಸಿ 155: ಎಸ್ಎಸ್:04,ದಿ:26-10-2005.

ಪ್ರಸ್ತಾವನೆ:

ಸಮಾಜ ಕಲ್ಯಾಣ ಇಲಾಖೆಯಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರು ಮತ್ತು ಮಹಿಳೆಯರಿಗಾಗಿ ಬಿ.ಜಿ.ಎಸ್.ಎಸ್.ಇನ್‌ಪೋಟಿಕ್ ನೀಡಿರುವ ಸಂಬಂಧ ನಡೆದಿರುವ ಅವ್ಯವಹಾರದ ಬಗ್ಗೆ ಉಲ್ಲೇಖ(1)ರಂತೆ ಪೋಲೀಸ ಮಹಾ ನಿರೀಕ್ಷಕರು ಬೆಂಗಳೂರು ಮೆಟ್ರೋ ಪಾಲಿಟನ್ ಕಾರ್ಯಾಚರಣೆ ಪಡೆಯವರು ನೀಡಿರುವ ವರದಿಯ ಮೇರೆಗೆ ಉಲ್ಲೇಖ(2)ರಂತೆ ದಿನಾಂಕ:4-2-2000ರಂದು ಕಾರಣ ಕೇಳಿ ಪತ್ರವನ್ನು ಜಾರಿ ಮಾಡಿದ್ದು, ಸದರಿ ಪತ್ರದಕ್ಕೆ ಉಲ್ಲೇಖ(3)ರಂತೆ ನೌಕರರು ಸಮಜಾಯಿಷಿಯನ್ನು ನೀಡಿರುತ್ತಾರೆ. ಸದರಿ ಅಧಿಕಾರಿ ಹಾಗೂ ನೌಕರರು ಸಲ್ಲಿಸಿರುವ ಸಮಜಾಯಿಷಿಯು ಒಪ್ಪಲು ಸಾಧ್ಯವಿಲ್ಲದೇ ಇರುವುದರಿಂದ ಸದರಿಯವರುಗಳಿಗೆ ಉಲ್ಲೇಖ (4) ರಂತೆ ದಿನಾಂಕ:10-4-2000ರಂದು ಆರೋಪಣಾ ಪಟ್ಟಿಗಳನ್ನು ಹೊರಡಿಸಿ ಉಲ್ಲೇಖ(7)ರಂತೆ ದಿನಾಂಕ:5-8-2000ರ ಈ ಕಚೇರಿಯ ಆದೇಶದ ಮೇರೆಗೆ ವಿಚಾರಣಾಧಿಕಾರಿಗಳನ್ನು ನೇಮಿಸಿ ವಿಚಾರಣಾಧಿಕಾರಿಗಳು ಕೂಲಂಕಷವಾಗಿ ವಿಚಾರಣೆ ನಡೆಸಿ ಉಲ್ಲೇಖ (8) ರಂತೆ ದಿ:4-8-2001ರಂದು ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ಸದರಿ ವರದಿಯಲ್ಲಿ ಸದರಿ ಅಧೀಕಾರಿಯವರ ಮೇಲೆ ಹೊರಿಸಿರುವ ಆರೋಪವು ಸಾಬೀತಾಗಿರುವುದು ತಿಳಿಸಿದ್ದು, ವಿಚಾರಣಾಧಿಕಾರಿಯವರು ವರದಿಯ ಮೇರೆಗೆ ದಿ:28-9-2001ರಂದು ಕಾರಣ ಕೇಳಿ ಪತ್ರವನ್ನು ಜಾರಿ ಮಾಡಲಾಗಿದ್ದು, ಸದರಿ ಕಾರಣ ಕೇಳಿ ಪತ್ರಕ್ಕೆ ಅಧಿಕಾರಿಯವರು ಉಲ್ಲೇಖ(10)ರಂತೆ ದಿ:26-12-2001ರಂದು ಸಮಜಾಯಿಷಿಯನ್ನು ಸಲ್ಲಿಸಿದ್ದಾರೆ. ಅರೋಪಿತ ಅಧಿಕಾರಿಯವರು ನೀಡಿರುವ ಸಮಜಾಯಿಷಿಯನ್ನು ಒಪ್ಪಲು ಸಾಧ್ಯವಿಲ್ಲದೇ ಇರುವುದರಿಂದ ಮೇಲ್ಕಂಡ ಅಧಿಕಾರಿಗಳು ಎಸಗಿರುವ ಆರೋಪವು ಶಿಕ್ಷಾರ್ಹವಾಗಿರುವುದರಿಂದ ಸದರಿಯವರಿಗೆ 1957ರ ಸಿಸಿಎ ನಿಯಮ 8ರಡಿಯಲ್ಲಿ ದಂಡನೆ ವಿಧಿಸಬೇಕಾಗಿದ್ದು, ಆದರೆ ಮೇಲ್ಕಂಡ ಅಧಿಕಾರಿಗಳು ಎರವಲು ಸೇವೆಯ ಅಧಿಕಾರಿಗಳು ಆಗಿರುವುದರಿಂದ 1957ರ ಸಿಸಿಎ ನಿಯಮ 15(2)(11)ರ ರೀತ್ಯ ನೇಮಕಾತಿ ಪ್ರಾಧಿಕಾರಿಯವರು ಶಿಸ್ತು ಕ್ರಮ ಜರುಗಿಸ ಬೇಕಾಗಿರುವುದರಿಂದ ಈ ಸಂಬಂಧ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಸೂಕ್ತ ಕ್ರಮ ಕೈಗೊಳ್ಳಲು ಉಲ್ಲೇಖ(11)ರ ರೀತ್ಯ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರಿಗೆ ದಿ:3-5-2002ರಂದು ಪತ್ರ ಬರೆಯಲಾಗಿರುತ್ತದೆ.

ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರು ಉಲ್ಲೇಖ(12)ರಂತೆ ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ಶ್ರೀ ಎಲ್.ಶಿವಮಲ್ಲು ಅವರು ಗ್ರೂಪ್ `ಎ` ಅಧಿಕಾರಿಗಳಾಗಿದ್ದು, ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿರುವುದರಿಂದ ಈ ಸಂಬಂಧ ಸರ್ಕಾರದ ಮಟ್ಟದಲ್ಲಿ ಕ್ರಮ ಕೈಗೊಂಡು ಕೂಡಲೇ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಬೆಂಗಳೂರು ಮಹಾನಗರ ಪಾಲಿಕೆಯ ಕಲ್ಯಾಣ ಇಲಾಖಾವತಿಯಿಂದ ಬಿ.ಜಿ.ಎಸ್.ಎಸ್.ಇನ್‌ಪೊಟಿಕ್ ಸಂಸ್ಥೆ ಬೆಂಗಳೂರು ಇವರಿಂದ 1997-98ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ:ಹಿಂದುಳಿದ ವರ್ಗ : ಅಲ್ಪ ಸಂಖ್ಯಾತರು ಮತ್ತು ಮಹಿಳೆಯರು ಸೇರಿ 730 ಅಭ್ಯರ್ಥಿಗಳಿಗೆ ಗಣಕ ಯಂತ್ರ ತರಬೇತಿ ನೀಡಿರುವ ಬಗ್ಗೆ ಸದರಿ ಸಂಸ್ಥೆಯವರು ಸುಮಾರು 70,17,500/-ರೂ ಗಳನ್ನು ಪಾವತಿ ಮಾಡುವ ಕುರಿತು ನಡೆದಿರುವ ಅವ್ಯವಹಾರದ ಬಗ್ಗೆ ಬಿ.ಎಂ.ಟಿ.ಎಫ್.ನವರು ತನಿಖೆ ನಡೆಸಿ ವರದಿ ನೀಡಿದ ಮೇರೆಗೆ ಮೆ:ಬಿ.ಎಸ್.ಎಸ್.ಇನ್ಫೊಟಿಕ್ ವಿಜಯನಗರ ಬೆಂಗಳೂರು ಈ ಸಂಸ್ಥೆಗೆ ಕಂಪ್ಯೂಟರ್ ತರಬೇತಿ ನೀಡುವ ಸಲುವಾಗಿ 30 ಅಭ್ಯರ್ಥಿಗಳನ್ನು ನಿಯೋಜಿಸಿದ್ದು, ಇದರ ಬದಲಿಗೆ 30 ಅಂಕಿಯ ಹಿಂದೆ 7ನ್ನು ಸೇರಿಸಿ 730 ಅಭ್ಯರ್ಥಿಗಳಿಗೆ ತರಬೇತಿ ನೀಡಲಾಗಿದೆ ಎಂದು ತಪ್ಪು ಮಾಹಿತಿ ನೀಡಿ ಉದ್ದೇಶಪೂರ್ವಕವಾಗಿ ನಗರಪಾಲಿಕೆಗೆ ವಂಚನೆ ಎಸಗಿ ಮೇಲ್ಕಂಡ ಸಂಸ್ಥೆಯೊಂದಿಗೆ ಶಾಮೀಲಾಗಿ ಮಹಾನಗರ ಪಾಲಿಕೆಗೆ ಬೃಹತ್ ಮೊತ್ತದ ನಷ್ಟ ಉಂಟು ಮಾಡಲು ಶ್ರೀ ಶಿವಮಲ್ಲು ಕಲ್ಯಾಣಾಧಿಕಾರಿ ಕಾರಣರೆಂದು ಆರೋಪ ಪಟ್ಟಿ ಮಾಡಿ ಸದರಿ ಅಧಿಕಾರಿಗಳ ವಿರುದ್ಧ 1957ರ ಸಿಸಿಎ ನಿಯಮ 15(2)(11)ರ ರೀತ್ಯ ನೇಮಕಾತಿ ಪ್ರಾಧಿಕಾರಿಯಾದ ಸಮಾಜ ಕಲ್ಯಾಣ ಇಲಾಖೆ ಶಿಸ್ತಿನ ಕ್ರಮ ತೆಗೆದುಕೊಳ್ಳಬೇಕೆಂದು ಮೇಲೆ ಓದಲಾದ ಕ್ರಮ ಸಂ(13)ರ ಪತ್ರದಲ್ಲಿ ಉಪ ಆಯುಕ್ತರು (ಆಡಳಿತ ಮತ್ತು ಮಾನವ ಸಂಪನ್ಮೂಲ) ರವರು ಕೋರಿರುತ್ತಾರೆ.

ಈ ಅಧಿಕಾರಿ ಎಸಗಿರುವ ಕರ್ತವ್ಯ ಲೋಪ ದೃಡಪಟ್ಟ ಕಾರಣ ಇವರ ಮಾಸಿಕ ಪಿಂಚಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957ರ ನಿಯಮ 214(3)(ಎ)ರಡಿಯಲ್ಲಿ ರೂ.350ರಂತೆ ಮುಂದಿನ 5 ವರ್ಷಗಳವರೆಗೆ ಹಿಡಿಯಲು ಸರ್ಕಾರವು ತೀರ್ಮಾನಿಸಿದೆ, ಮೇಲೆ ಓದಲಾದ ಕ್ರಮಸಂ(14)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರಮಸಂ(15)ರ ಪತ್ರದಲ್ಲಿ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ ಶ್ರಿ ಶಿವಮಲ್ಲು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,(ನಿವೃತ್ತ),ಇವರ ಮಾಸಿಕ ಪಿಂಚಣಿಯಲ್ಲಿ ರೂ.350/- (ಮೂನ್ನೂರು ಐವತ್ತು ರೂಪಾಯಿಗಳು ಮಾತ್ರ) ಗಳನ್ನು ಶಾಶ್ವತವಾಗಿ ತಡೆಹಿಡಿಯುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಕಇ 443 ಪಕಸೇ 2000, ಬೆಂಗಳೂರು,ದಿನಾಂಕ: 21ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1957 ರ ನಿಯಮ 214(3)(ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶಿವಮಲ್ಲು (ನಿವೃತ್ತ) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಇವರ ಮಾಸಿಕ ಪಿಂಚಣಿಯಲ್ಲಿ ರೂ.350/- (ಮೂನ್ನೂರು ಐವತ್ತು ರೂಪಾಯಿಗಳು ಮಾತ್ರ) ಗಳನ್ನು ಶಾಶ್ವತವಾಗಿ ತಡೆಹಿಡಿಯಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್. 684 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ:** 25 ಮೆಗಾ ವ್ಯಾಟ್ ಸಾಮರ್ಥ್ಯದ ಬಗಾಸ್ ಆಧಾರಿತ ಸಹ ವಿದ್ಯುತ್ ಯೋಜನೆಯನ್ನು M/s Hari Priya Sugar Works Limited ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವುದನ್ನು M/s Shree Renuka Sugars Limited ಎಂಬ ಕಂಪನಿಯ ಹೆಸರಿನಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಪತ್ರ ಸಂಖ್ಯೆ : ಡಿಇ 91 ಎನ್‌ಸಿಇ 2000 ದಿನಾಂಕ : 10.07.2000.
2) M/s Shree Renuka Sugars Limited ನವರ ಪತ್ರ ದಿನಾಂಕ: 13.3.2006.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/04/ಆರ್‌ಎಸ್‌ಎಲ್/2006/645 ದಿನಾಂಕ: 15.3.2006.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ M/s Hari Priya Sugar Works Limited ಕಂಪನಿಗೆ ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ಕೊಕಟ್ನೂರು ಹೋಬಳಿಯ ಬುರ್ಲಟ್ಟಿ ಎಂಬಲ್ಲಿ 25 ಮೆಗಾ ವ್ಯಾಟ್ (Gross) ಮತ್ತು 20 ಮೆಗಾ ವ್ಯಾಟ್ (Exportable) ಸಾಮರ್ಥ್ಯದ ಸಹ ವಿದ್ಯುತ್ ಸ್ಥಾವರವನ್ನು ಸ್ಥಾಪಿಸಲು ಸರ್ಕಾರದ ನಿರಾಕ್ಷೇಪಣೆ ನೀಡಲಾಗಿದೆ.

ಓದಲಾದ (2)ರ ಪತ್ರದಲ್ಲಿ M/s Shree Renuka Sugars Limited ನವರು ಸದರಿ ಸ್ಥಾವರವನ್ನು ವಹಿಸಿಕೊಂಡು ಯೋಜನೆಯನ್ನು ಅನುಷ್ಠಾನ ಮಾಡುವ ಹಂತದಲ್ಲಿರುವುದರಿಂದ ಸದರಿ ಸ್ಥಾವರಕ್ಕಾಗಿ ನೀಡಿರುವ ನಿರಾಕ್ಷೇಪಣೆಯನ್ನು M/s Shree Renuka Sugars Limited ನವರಿಗೆ ವರ್ಗಾಯಿಸಬೇಕೆಂದು ಕೋರಿರುತ್ತಾರೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು M/s Hari Priya Sugar Works Limited ನವರು ಆಡಳಿತಾತ್ಮಕ ಕಾರಣಗಳಿಂದ ಸ್ಥಾವರವನ್ನು ಸ್ಥಾಪಿಸಲು ಸಾಧ್ಯವಾಗದಿರುವುದರಿಂದ ಸದರಿಯವರಿಗೆ ನೀಡಿರುವ ನಿರಾಕ್ಷೇಪಣೆಯನ್ನು M/s Shree Renuka Sugars Limited ನವರಿಗೆ ವರ್ಗಾಯಿಸಿ ಸ್ಥಾವರವನ್ನು ಸ್ಥಾಪಿಸಲು ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 135 ಎನ್‌ಸಿಇ 2006, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**

M/s Hari Priya Sugar Works Limited ಕಂಪನಿಗೆ ಬೆಳಗಾಂ ಜಿಲ್ಲೆಯ ಅಥಣಿ ತಾಲ್ಲೂಕಿನ ಕೊಕಟ್ನೂರು ಹೋಬಳಿಯ ಬುರ್ಲಟ್ಟಿ ಎಂಬಲ್ಲಿ 25 ಮೆಗಾ ವ್ಯಾಟ್ (Gross) ಮತ್ತು 20 ಮೆಗಾ ವ್ಯಾಟ್ (Exportable) ಸಾಮರ್ಥ್ಯದ ಸಹ ವಿದ್ಯುತ್ ಸ್ಥಾವರವನ್ನು ಸ್ಥಾಪಿಸಲು ನೀಡಿರುವ ಸರ್ಕಾರದ ನಿರಾಕ್ಷೇಪಣೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ M/s Shree Renuka Sugars Limited ನವರಿಗೆ ವರ್ಗಾಯಿಸಿ ಸ್ಥಾವರವನ್ನು ಸ್ಥಾಪಿಸಲು ಅನುಮತಿ ನೀಡಲಾಗಿದೆ. ಓದಲಾದ (1)ರ ಪತ್ರದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 657

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ:: ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸೊಗಿ ಎಂಬಲ್ಲಿ ಹಂಚಿಕೆ ಮಾಡಲಾಗಿರುವ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 8.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ : ಡಿಇ 110 ಎನ್‌ಸಿಇ 2000 (ಭಾಗ) ದಿನಾಂಕ : 12.2.2002.
2) ಸರ್ಕಾರದ ಆದೇಶ ಸಂಖ್ಯೆ: ಇಂಇ 191 ಎನ್‌ಸಿಇ 2004 ದಿನಾಂಕ: 19.6.2004.
3) ಸರ್ಕಾರದ ಆದೇಶ ಸಂಖ್ಯೆ: ಇಎನ್ 304 ಎನ್‌ಸಿಇ 2005 ದಿನಾಂಕ: 14.10.2005.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/08/ಎಎಸ್‌ಇ-ಸೊಗಿ/2006/722 ದಿನಾಂಕ: 29.3.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ :: ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕು ಸೋಗಿ ಎಂಬಲ್ಲಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಪ್ರಾತ್ಯಕ್ಷಿಕ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 2 ಮೆಗಾ ವ್ಯಾಟ್‌ನಿಂದ 2.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (3)ರ ಆದೇಶದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಸೋಗಿ ಎಂಬಲ್ಲಿ ಹಂಚಿಕೆ ಮಾಡಲಾಗಿದೆ.

ಓದಲಾದ (4)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಆಡಳಿತ ಮತ್ತು ತಾಂತ್ರಿಕ ಕಾರಣಗಳಿಂದಾಗಿ ಉಲ್ಲೇಖ 3ರ ಆದೇಶದಲ್ಲಿ ಹಂಚಿಕೆ ಮಾಡಿರುವ 6 ಮೆಗಾ

ವ್ಯಾಟ್ ಸಾಮರ್ಥ್ಯದ ಯೋಜನೆಯನ್ನು ರದ್ದುಪಡಿಸಿ ಒಟ್ಟಾಗಿ 2.5 ಮೆಗಾ ವ್ಯಾಟ್‌ನಿಂದ 8.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಕೋರಿಕೊಂಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 164 ಎನ್‌ಸಿಇ 2006, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2006**

ಮೆ:: ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲ್ಲೂಕಿನ ಸೋಗಿ ಎಂಬಲ್ಲಿ ಸರ್ಕಾರದ ಆದೇಶ ಸಂಖ್ಯೆ: ಇಎನ್ 304 ಎನ್‌ಸಿಇ 2005 ದಿನಾಂಕ: 14.10.2005ರಲ್ಲಿ ಹಂಚಿಕೆ ಮಾಡಲಾಗಿರುವ 6 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಮಾಡಲಾಗಿದೆ.

ಈ ಮೊದಲು ನೀಡಿದ 2.5 ಮೆಗಾ ವ್ಯಾಟ್ ಸಾಮರ್ಥ್ಯದ ಯೋಜನೆಯನ್ನು 6 ಮೆಗಾ ವ್ಯಾಟ್‌ನೊಂದಿಗೆ ಸೇರಿಸಿ ಒಟ್ಟು 8.5 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ. ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 660

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಧಾರವಾಡ ಜಿಲ್ಲೆಯ ನವಲಗುಂದ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 296 ಬೆಮಪ್ರಾ 2002 ದಿನಾಂಕ 27-12-2002.
2. ನವಲಗುಂದ ಪಟ್ಟಣ ಪಂಚಾಯತಿಯ ಪತ್ರ ಸಂಖ್ಯೆ:ನಯೋಪ್ರಾ ಪಾಪಂನ 303 ಮಾಪ್ಲ 2005-06 ದಿನಾಂಕ: 17-1-2006.
3. ನಗರ ಯೋಜನಾ ನಿರ್ದೇಶಕರ ಟಿಪ್ಪಣಿ ಸಂಖ್ಯೆ:ನಯೋ 8 ನವಲಗುಂದ/ಯೋ1049/2006.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ಆದೇಶದಲ್ಲಿ ಸರ್ಕಾರವು ಧಾರವಾಡ ಜಿಲ್ಲೆಯ ನವಲಗುಂದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸರ್ಕಾರವು ತಾತ್ಕಾಲಿಕ ಅನುಮೋದನೆ ನೀಡಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ನವಲಗುಂದ ಪಟ್ಟಣ ಪಂಚಾಯತಿಯ ಮುಖ್ಯಾಧಿಕಾರಿಗಳು ನವಲಗುಂದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಯನ್ನು ರೂಪಿಸಿ ಸರ್ಕಾರದ ಅಂತಿಮ ಅನುಮೋದನೆಗಾಗಿ ಸಂಬಂಧಪಟ್ಟ ಮಹಾಯೋಜನೆಯ ನಕ್ಷೆಗಳು ಮತ್ತು ವರದಿಗಳನ್ನು ಕಳುಹಿಸಿರುತ್ತಾರೆ.

ನವಲಗುಂದ ಪಟ್ಟಣ ಜನಸಂಖ್ಯೆಯು 2001ರ ಜನಗಣತಿಯಂತೆ 22,200ರಷ್ಟು ಇದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ 2021ರ ವೇಳೆಗೆ ಜನಸಂಖ್ಯೆಯು 31,000 ಆಗಬಹುದೆಂದು ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ನವಲಗುಂದ ಪಟ್ಟಣದ ಜನಸಂಖ್ಯೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವ ಹಾಗೂ ಮಹಾಯೋಜನಾ ತಯಾರಿಕೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ಪಟ್ಟಣದ ಮುಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾದ ಭೂಮಿಯನ್ನು ಕಾಯ್ದಿರಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಹಾಗೂ ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರಚಿಸಲಾಗಿದೆ.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರಲ್ಲಿನ ಅವಕಾಶದಂತೆ ಸರ್ಕಾರದಿಂದ ತಾತ್ಕಾಲಿಕ ಅನುಮೋದನೆಗೊಂಡಿರುವ ನವಲಗುಂದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಯ ಪ್ರಸ್ತಾಪಿತ ಭೂ ಉಪಯೋಗ ನಕ್ಷೆಯಲ್ಲಿ ನಗರ ಯೋಜನಾ ನಿರ್ದೇಶಕರ ಸಲಹೆಯಂತೆ ಕೆಲವು ಜಮೀನುಗಳ ಭೂ ಉಪಯೋಗವನ್ನು ಮಾರ್ಪಡಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 47 ಬೆಮಪ್ರಾ 2006, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ನವಲಗುಂದ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಾಸ್ಟರ್ ಪ್ಲಾನ್‌ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಕರ್ನಾಟಕ ನಗರ ಮತ್ತು ಗ್ರಾಮಾಂತರ (ತಿದ್ದುಪಡಿ) ಕಾಯ್ದೆ 2004ರಂತೆ ಅಂತಿಮ ಅನುಮೋದನೆ ನೀಡಿದೆ.

ಮಾಸ್ಟರ್ ಪ್ಲಾನ್‌ಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 680

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ